# ಶೃಂಗೇರಿ ಸಹಾಯಕ ವಿದ್ಯಾಧಿಕಾರಿಗಳು ಉತ್ತರಿಸುವರೆ?

(ಈ ಪ್ರಶ್ನೆ ಕೇಳಿದವರು ಶೃಂಗೇರಿ ತಾಲ್ಲೂಕಿನ, 'ದೀವಟಿಗೆ' ಓದುಗರಾದ ಒಬ್ಬ ನಾಗರಿಕರು. ಅವರು ಸಹಾಯಕ ವಿದ್ಯಾಧಿಕಾರಿಗಳ ಆಡಳಿತದ ಹಲವಾರು ಅಂಶಗಳನ್ನು ಪಟ್ಟಿ ಮಾಡಿ, ಅವುಗಳಿಗೆ ಅವರಿಂದ ವಿವರಣೆ ಅಥವಾ ಸ್ಪಷ್ಟೀಕರಣ ಬಯಸಿದ್ದಾರೆ. ಅವುಗಳನ್ನು ಸಂಕ್ಷೇಪಿಸಿ ಪ್ರಕಟಿಸಲಾಗಿದೆ.)

೧) ಬೇಗಾರು ಹಿ. ಪ್ರಾ. ಶಾಲೆಯಲ್ಲಿ ಹಿರಿಯ ಉಪಾಧ್ಯಾಯರು ಇದ್ದರೂ ಸಹ ಅಲ್ಲಿಗೆ ವರ್ಷಕ್ಕೊಬ್ಬ ಮುಖ್ಯೋಪಾಧ್ಯಾಯರನ್ನು ನೇಮಿಸುತ್ತಿರುವುದು;

೨) ಮೆಣಸೆ ಹಿ.ಪ್ರಾ. ಶಾಲೆಯಲ್ಲಿ ಒಬ್ಬ ಸಹೋಪಾಧ್ಯಾಯನಿಂದ ಇತರೆ ಎಲ್ಲಾ ಉಪಾಧ್ಯಾಯರು ತಮಗಾದ ತೊಂದರೆಯನ್ನ ನಿವೇದಿಸಿಕೊಂಡಾಗ ಆತನನ್ನು ಸ್ಥಳದಿಂದ ಬದಲಾಯಿಸದೇ ಎರಡನೇ ಸಾರಿ ಮುಖ್ಯೋಪಾಧ್ಯಾಯರಿಗೆ ಘಾಸಿಯಾದ ಮೇಲೆ ಅಶಿಸ್ತಿನಿಂದ ವರ್ತಿಸಿದ ಉಪಾಧ್ಯಾಯರ ಮೇಲೆ ಕ್ರಮ ತೆಗೆದುಕೊಳ್ಳುವ ಬದಲು ಮುಖ್ಯೋಪಾಧ್ಯಾಯರ ಮೇಲೆ ಕ್ರಮ ತೆಗೆದುಕೊಂಡದ್ದು (ಇದು ಮುಖ್ಯೋಪಾಧ್ಯಾಯ ಹುದ್ದೆಯ ಮಾನಹಾನಿಯಲ್ಲವೇ? ಮುಖ್ಯೋಪಾಧ್ಯಾಯರ ಮೇಲೆ ಕ್ರಮ ಕೈಗೊಳ್ಳಲು ಅವರಿಂದೇನಾದರೂ ಹಣ ದುರುಪಯೋಗ ಹಾಗೂ ಇನ್ನೇನಾದರೂ ಕಾನೂನು ಬಾಹಿರ ಕೆಲಸ ನಡೆದಿತ್ತೇ? ಇಲ್ಲವಾದರೆ ಮುಖ್ಯೋಪಾಧ್ಯಾಯರಿಗೆ ರಕ್ಷಣೆ ಕೊಡುವುದು ಅಗತ್ಯವಲ್ಲವೇ?);

೩) ಕಿಕ್ರೆ ಪ್ರಾಥಮಿಕ ಶಾಲೆಯಲ್ಲಿ ಆರೆಂಟು ವರ್ಷಗಳಿಂದಲೂ ನೆಲಸಿರುವ ಉಪಾಧ್ಯಾಯರು ಮನಸ್ವೇಚ್ಛೆ ತರಗತಿಗೆ ಹೋಗುವುದಲ್ಲದೇ ಶಾಲಾ ಮಕ್ಕಳನ್ನು ಸರತಿಯಂತೆ ತನ್ನ ಮನೆಗೆ ಕೆಲಸಕ್ಕೆ ಹಾಗೂ ದನಗಳಿಗೆ ಹುಲ್ಲುತರಲು ಕಳಿಸುತ್ತಿರುವುದು ಗೊತ್ತಿದ್ದೂ, ಸಾರ್ವಜನಿಕರು ತಮ್ಮಲ್ಲಿ ನಿವೇದಿಸಿದ್ದಾಗ್ಯೂ ಕ್ರಮ ತೆಗೆದುಕೊಳ್ಳದಿರುವುದು (ಹಾಗೂ ಇತ್ತೀಚೆಗೆ ಸದರಿಯವರು ತನ್ನ ಮನೆ ದನ ಸತ್ತಾಗ ಶಾಲಾ ಮಕ್ಕಳಿಂದಲೇ ದಫನ್ ಮಾಡಿಸಿರುವುದನ್ನು ಗ್ರಾಮ ಪ್ರಮುಖರು ನಿಮಗೆ ತಿಳಿಸಿಲ್ಲವೇ?);

೪) ಶಿಸ್ಲೆ ಹಿ. ಪ್ರಾ. ಶಾಲೆಯಲ್ಲಿ ಮಾತ್ರ ಮುಖ್ಯೋಪಾಧ್ಯಾಯರ ವರದಿಯನ್ನನುಸರಿಸಿ ಆ ಶಾಲೆಯ ಸಹೋಪಾಧ್ಯಾಯರ ಮೇಲೆ ಮಾತ್ರ ಅಶಿಸ್ತಿಗಾಗಿ ಕ್ರಮ ತೆಗೆದುಕೊಂಡಿರುವುದು;

೫) ಶಾಲಾ ಹಿತದೃಷ್ಟಿಯಿಂದ ಶ್ರೀ ಎಲ್ಲಪ್ಪರಾಜು ಎಂಬ ಶಿಕ್ಷಕರನ್ನ ಉಪನಿರ್ದೇಶಕರ ಆಜ್ಞೆಗೆ ವಿರುದ್ಧವಾಗಿ ಏಕೋಪಾಧ್ಯಾಯ ಶಾಲೆಯಿಂದ ಅವರನ್ನು ಬೇಡ ಬೇಡವೆಂದರೂ ಕುಂಚೇಬೈಲು ಶಾಲೆಗೆ ನಿಯೋಜಿಸಿರುವುದು; ಹಾಗೂ ಮುಖ್ಯೋಪಾಧ್ಯಾಯರ ಪ್ರಾರ್ಥನೆಗೆ ಬೆಲೆಕೊಡದೆ ರಾಜಕಾರಣಿಯೊಬ್ಬರು ಹೇಳಿದಾಕ್ಷಣ ಸದರಿಯವರನ್ನು ಶಿಡ್ಲೆಗೆ ಬದಲಾಯಿಸಿದ್ದು;

೬) ೨ ಮೈಲಿ ದೂರದ ಹಳ್ಳಿಯ ಶಾಲೆ ಉಪಾಧ್ಯಾಯರೊಬ್ಬರು ಅನಾರೋಗ್ಯದಿಂದ ನರಳುತ್ತಿರುವುದಾಗಿ ವೈದ್ಯಕೀಯ ಸೌಲಭ್ಯವಿರುವ ಪಟ್ಟಣಕ್ಕೆ ಬದಲಾಯಿಸುವ ಬದಲು ಅವರು ಆಸ್ಪತ್ರೆಯಲ್ಲಿದ್ದಾಗಲೇ ಆರು ಮೈಲಿ ದೂರದ ಮತ್ತೊಂದು ಹಳ್ಳಿ ಶಾಲೆಗೆ ವರ್ಗಾಯಿಸಿರುವುದು;

೭) ದಂಪತಿಗಳಾದ ನೌಕರರಲ್ಲಿ ಕೆಲವು ದಂಪತಿಗಳು ಹಳ್ಳಿಯಲ್ಲೂ, ಇನ್ನು ಕೆಲವರಲ್ಲಿ ಇಬ್ಬರೂ ಪಟ್ಟಣದಲ್ಲೂ ತಳವೂರುವಂತೆ ಮಾಡಿರುವುದು;

೮) ಉನ್ನತ ಅಧಿಕಾರಿಯೊಬ್ಬರ ಪತ್ನಿಯನ್ನು ಕಿರಿಯ ಪ್ರಾಥಮಿಕ ಶಾಲೆಯಿಂದ ಹಿರಿಯ ಪ್ರಾಥಮಿಕ ಶಾಲೆಗೆ ವರ್ಗಾಯಿಸಿಕೊಟ್ಟಿರುವುದು (ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಕೆಲಸ ಮಾಡುವುದು ಅವಮಾನವೇ? ಹಾಗೂ ಹಳ್ಳಿಯಲ್ಲಿ ಉಪಾಧ್ಯಾಯರ ಕೊರತೆ ಇದ್ದರೂ, ಬಡ ಹೆಣ್ಣುಮಕ್ಕಳು ಹಳ್ಳಿಯಲ್ಲಿ ಕೆಲಸ ಮಾಡುತ್ತಿದ್ದರೂ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಇವರನ್ನು ಪಟ್ಟಣದ ಕಿರಿಯ ಪ್ರಾಥಮಿಕ ಶಾಲೆಯಿಂದ ಅಲ್ಲಿಯೇ ಹಿರಿಯ ಪ್ರಾಥಮಿಕ ಶಾಲೆಗೆ ವರ್ಗಾಯಿಸುವ ಬದಲು ಹಳ್ಳಿಯ ಪ್ರಾಥಮಿಕ ಶಾಲೆಗೆ ವರ್ಗಾಯಿಸಬಹುದಿತ್ತಲ್ಲ?);

೯) ಪಟ್ಟಣದ ಮುಖ್ಯೋಪಾಧ್ಯಾಯರೊಬ್ಬರು ಬಡಮಕ್ಕಳ ವಿದ್ಯಾರ್ಥಿ ವೇತನವನ್ನು ಕಬಳಿಸಿದ್ದಾರೆಂದು ಪೋಷಕರಿಂದಲೇ ದೂರು ಬಂದಿದ್ದರೂ ಸಹ ಗಮನ ಹರಿಸದಿರುವುದು; ಸದರಿಯವರು ತಮಗೆ ಬೇಕಾದ ಮಕ್ಕಳನ್ನು ಮಾತ್ರ ಪಾಸುಮಾಡಿ ಹಾಗೂ ಶಾಲಾ ದಾಖಲೆಗಳನ್ನು ಸಮರ್ಪಕವಾಗಿ ಇಡದಿದ್ದುದು ವರ್ಷಗಟ್ಟಲೇ ನೋಡಿದರೂ ಸುಮ್ಮನಿರುವುದು;

೧೦) ಕೆಲವು ಉಪಾಧ್ಯಾಯರು ಕಾನೂನಿನಂತೆ ಪೂರ್ವಭಾವಿಯಾಗಿ ರಜಾ ಅರ್ಜಿ ಸಲ್ಲಿಸಿದ್ದರೂ ಅದನ್ನು ತಿರಸ್ಕರಿಸಿ, ಇನ್ನು ಕೆಲವರಿಗೆ ಮಾತ್ರ ಗೈರು ಹಾಜರಿ ವರದಿ ಬಂದರೂ ಸಹ ರಜಾ ಅರ್ಜಿಯನ್ನು ಪಡೆದು ಕರುಣೆಯಿಂದ ರಜಾ ಮಂಜೂರು ಮಾಡುವ ಪಕ್ಷಪಾತ;

೧೧) ಅವರ ಕಾರ್ಯಾಲಯಕ್ಕೆ ಭೇಟಿ ಕೊಟ್ಟಾಗಲೆಲ್ಲಾ ಕಾರ್ಯಾಲಯವು ನಿಷ್ಕ್ರಿಯಗೊಂಡಿರುವುದು. (ಅವರಿಗೂ ಅವರ ಕಾರ್ಯಾಲಯದ ಸಿಬ್ಬಂದಿಗೂ ವಾರ್ಷಿಕ ಎಷ್ಟು ಆಕಸ್ಮಿಕ ರಜೆಗಳಿವೆ?);

೧೨) ತಮ್ಮ ಕಛೇರಿ ಸಿಬ್ಬಂದಿಗೆ ಮಾತ್ರ ೧ನೇ ತೇದಿಯಂದೇ ಸಂಬಳ. ಆದರೆ ಶಿಕ್ಷಕರಿಗೆ ಮಾತ್ರ ಏಳೆಂಟು ತೇದಿಗಳು ಸಂದರೂ ವೇತನವಿಲ್ಲದಿರುವುದು (ಈ ರೀತಿ ಸಂಬಳ ತಡವಾಗುವುದರಿಂದ ೧ನೇ ತಾರೀಖಿನಿಂದ ಸಂಬಳವಾಗುವವರೆಗೂ ಪ್ರತಿದಿನವೂ ಉಪಾಧ್ಯಾಯರು ಸಂಬಳಕ್ಕಾಗಿ ಶಾಲೆ ಮುಚ್ಚಿ ಪೇಟೆಯಲ್ಲಿ ತಿರುಗುತ್ತಿರುವುದು ನೋಡಿದಾಗ ನಿಮಗೇನನ್ನಿಸುತ್ತದೆ?);

೧೩) ಸೇವಾ ಹಿರಿತನ ಕಡೆಗಣಿಸಿ ಟೌನ್ ಕೆ.ಪ್ರಾ. ಬಾಲಕರ ಶಾಲೆ, ಬೇಗಾರು, ಕುಂಚೇಬೈಲು, ಮೆಣಸೆ, ವೈಕುಂಠಪುರ, ತೆಕ್ಕೂರು ಮುಂತಾದ ಶಾಲೆಗಳಲ್ಲಿ ಕಿರಿಯರನ್ನು ಮುಖ್ಯೋಪಾಧ್ಯಾಯರಾಗಿ ನೇಮಿಸಿ ಹಿರಿಯರನ್ನು ಬದಿಗೊತ್ತಿರುವುದು ;

೧೪) ಶೃಂಗೇರಿಯಲ್ಲಿ ಹೆಚ್ಚಿನ ರೀತಿಯಲ್ಲಿ ಬೃಹತ್ ಛತ್ರಗಳಿದ್ದರೂ ಉಪಾಧ್ಯಾಯರನ್ನು ಸೂರೆಗೊಂಡು ವಿದ್ಯಾ ಭವನ ನಿರ್ಮಾಣ ಕೈಗೊಂಡಿರುವುದು. (ಸಾರ್ವಜನಿಕರಿಂದ ಹಾಗೂ ಮಕ್ಕಳಿಂದ ಟಿಕೇಟುಗಳನ್ನು ಮಾರಿ ಹಣ ಸಂಗ್ರಹಿಸುತ್ತಿರುವುದು ಶಿಕ್ಷಕರ ಮಾನ ಮರ್ಯಾದೆಗಳನ್ನು ಗಾಳಿಗೆ ತೂರಿದಂತಲ್ಲವೆ?);

೧೫) ನಿರಪರಾಧಿಗಳಾದ ಹಾಗೂ ಉತ್ತಮ ಶಿಕ್ಷಕರಾದ ಸರ್ವಶ್ರೀ ಕೆ. ಎಲ್. ಗೋವಿಂದರಾವ್, ನಾಗಪ್ಪನಾಯ್ಕ, ಕೆ.ಕುಮಾರ, ಡಿ.ವಿ. ಸರೋಜಮ್ಮ, ಎಲ್.ಗೋಪಾಲ, ಯು.ಎಸ್. ಪ್ರಭಾಕರ, ಸದಾಶಿವಯ್ಯ ಮುಂತಾದವರನ್ನು "ಅಸಮರ್ಥಮುಖ್ಯೋಪಾಧ್ಯಾಯರು" ಎಂದು ಕಂಡವರ (ಕರಟಕ ದಮನಕರ) ಮಾತು ಕೇಳಿ ಬಲಿ ಪೀಠಕ್ಕೆ ಬಲಿ ಕೊಟ್ಟಿರುವುದು;

೧೬) ವಾರ್ಷಿಕ ವರ್ಗಾವಣೆಯಲ್ಲಿ ಕಾನೂನುಗಳನ್ನು ಬದಿಗೊತ್ತಿ ತಮಗಿಷ್ಟ ಬಂದಂತೆ ಶಾಲೆಯ ಹಾಗೂ ಉಪಾಧ್ಯಾಯರ ಹಿತಗಳನ್ನು ಕಡೆಗಣಿಸಿ (ತಮ್ಮ ಸಲಹೆಗಾರರಾದ ಕರಟಕ ದಮನಕರ ಮಾತಿನಂತೆ) ಮನಸ್ಸಿಗೆ ಬಂದಂತೆ ಕೆಲವರನ್ನು 'ಚೆಂಡಾಟ'ವಾಡಿರುವುದು;

೧೭) ಬಹುತೇಕ ಶಾಲೆಗಳಲ್ಲಿ ಬಹಳಷ್ಟು ಉಪಾಧ್ಯಾಯರು ಸಕಾಲದಲ್ಲಿ ಶಾಲೆಗಳಿಗೆ ಹಾಜರಾಗದೆ ಕೆಲವುದಿನ ೧೦-೨೦ರ ಬದಲು ೧೧ ಅಥವಾ ೧೧-೩೦ರ ಒಳಗಾಗಿ ಶಾಲೆ ಬಾಗಿಲು ತೆಗೆದು ೪ ಗಂಟೆಗೆ ಶಾಲೆ ಮುಚ್ಚಿ ಬರುತ್ತಿರುವುದು ಗಮನಿಸಿಯೂ ಸುಮ್ಮನಿರುವುದು;

ಇವೆಲ್ಲವೂ ನಿಷ್ಪಲ, ನಿಷ್ಪಕ್ಷಪಾತ ಆಡಳಿತದ ದಕ್ಷತೆಯ ವೈಖರಿಯೆ?

–'ಸಂಚಾರಿ', ಶೃಂಗೇರಿ.

---

# ಕತ್ತಲಲ್ಲಿ ಕಾಣೆಯಾದ ಮನುಷ್ಯತ್ವ

## (ಒಂದು ಸತ್ಯ ಕತೆ)

ನನ್ನ ಗೆಳೆಯನೊಬ್ಬನ ಮೇಲೆ ಪೋಲೀಸ್ ಹಲ್ಲೆ ನಡೆದಿತ್ತು. ಪೋಲಿಸರ ಏಟು ದಾಳಿಗೆ ಒಳಗಾದ ಅವನು ನೋವಿನಿಂದ ಮುಲುಕುತ್ತಿದ್ದ. ಖಾಕಿ ದರ್ಪವು ನನ್ನ ಮಿದುಳನ್ನು ಸುಡುತ್ತಿತ್ತು. ಈ ಪೋಲೀಸರನ್ನು ಮನುಷ್ಯರಾಗಿಸುವುದು ಹೇಗೆಂಬ ಚಿಂತೆ ನನ್ನನ್ನು ಕುದಿಸುತ್ತಾ ಇತ್ತು. ಕಗ್ಗತ್ತಲ ಆ ಮೌನದಲ್ಲಿ ಕಾಣೆಯಾದ ಮನುಷ್ಯತ್ವದ ಬಗ್ಗೆ ಆತಂಕ ತುಂಬಿಕೊಂಡಿದ್ದೆ.

ಅದು ಕೆ.ಆರ್. ಆಸ್ಪತ್ರೆಯ ಎಮರ್ಜೆನ್ಸಿ ವಾರ್ಡು. ರಾತ್ರಿ ಹತ್ತು ಗಂಟೆ ದಾಟಿತ್ತು. ಗೆಳೆಯ ಒಳಗೆ ಡಾಕ್ಟರ ಪರೀಕ್ಷೆಗೆ ಒಳಗಾಗಿದ್ದ. ಅವನೊಂದಿಗೆ ಬಂದ ಪೋಲೀಸ್ ಚಳಿಗೆ ಮುದುರಿಕೊಂಡು ಕುಂತು ಸುತ್ತಾ ಹತ್ತುದಿಕ್ಕಿಗೆ ತನ್ನ ವಿಚಿತ್ರ ದೃಷ್ಟಿ ಚೆಲ್ಲುತ್ತಾ, ಸಾಮಾನ್ಯ ಮನುಷ್ಯ ಪ್ರಾಣಿಯ ಹಾಗೇ ಕುಂತಿದ್ದ. ಸಂಸಾರದ ಜಂಜಡಗಳಿಂದ ಬರಡಾದ ಆತ ಎಲ್ಲೋ ಒಮ್ಮೊಮ್ಮೆ ಮನುಷ್ಯನ ಹಾಗೆ ನಡೆದುಕೊಳ್ಳಲೂಬಹುದು....ಹೀಗೇ ನನ್ನ ಚಿಂತೆ ಎತ್ತೆತ್ತಲೋ ಹರೀತ ಇತ್ತು. ನನ್ನೆಲ್ಲ ಚಿರಗು, ಕುತೂಹಲ, ಪ್ರಶ್ನೆಗಳ ನಡುವೆ ಒಂದು ಸಂಗತಿ ಜರುಗಿತು.

ಚೀಟಿ ಬರೆಯುವ ಕೌಂಟರಿನಲ್ಲಿ ಏನೋ ಗದ್ದಲ ಸುರುವಾಯಿತು. ಆ ಕಡೆ ಕಣ್ಣಾಡಿದೆ. ಒಬ್ಬ ಯುವಕ; ಆತನ ವಯಸ್ಸು ಇಪ್ಪತ್ತಾರು, ಇಪ್ಪತ್ತೇಳರ ನಡುವೆ ತೂಗಾಡುತ್ತಾ ಇತ್ತು. ಪರಟು ನಡಿಗೆ, ವಿಚಿತ್ರ ಕುಹಕ ತುಂಬಿದ ಕಣ್ಣುಗಳು. ಆತನ ಎಡ ತೋಳಿಂದ ರಕ್ತ ಧಾರಾಕಾರವಾಗಿ ಸುರೀತಿತ್ತು, ಅಲ್ಲಿದ್ದ ಕೆಲವರು ತಲ್ಲಣಿಸಿ ಹೋದರು.

"ರಕ್ತ ಹೋಗ್ತಿದೆ, ಬತ್ತಿ ಹಿಡುಕೊಳ್ರಿ" ಎಂದೆ ನಾನು. ಆತ ಪ್ರತಿಯಾಗಿ "ಹೋದ್ರೆ ಹೋಗಲಿಬುಡ್ರಿ" ಎಂದ.

ಚೀಟಿ ಕೌಂಟರಿನವ ಗಾಢ ನಿರ್ಲಿಪ್ತತೆಯನ್ನು ಧರಿಸಿಕೊಂಡು ಗಾಯಾಳುವಿನ ಹೆಸರು ವಯಸ್ಸುಗಳ ಕೇಳಿದ: ಹೆಸರೇನು? ಆತ ಯಾವುದೋ ಹೆಸರು ಹೇಳಿದ. ಮತ್ತೆ ದೇ ಗಡಸು ದನಿ ಕೇಳಿತು: ವಯಸ್ಸೆಷ್ಟು?

ಗಾಯಾಳು ಕ್ಷೀಣದನಿಯಲ್ಲಿ ತಾತ್ಸಾರ ತುಂಬಿಕೊಂಡು "ಎಪ್ಪಾರು ಬರಕಳಿ" ಎಂದಿತು.

"ಎಪ್ಪಾರು ಅಂದ್ರೇನಯ್ಯ? ಸರಿಯಾಗೇಳು." ಆತ ವಯಸ್ಸು ಹೇಳಿದ. ಚೀಟಿ ಪಡೆದ ಆ ಹುಡುಗ ಡಾಕ್ಟರ್ ಕೋಣೆಗೆ ನಡೆದ. ಆತ ನಡೆದ ದಾರಿಯಲ್ಲಿ ರಕ್ತದ ಬರಹ ರೆಡಿಯಾಯ್ತು. ಆತನ ದೇಹದಿಂದ ಹರಿದ ರಕ್ತ ನೆಲದಲ್ಲಿ ಕಲೆಯಾಗಿ ನಿಂತು ಮಾನವತೆಯ ಬುಡವನ್ನೇ ಅಲ್ಲಾಡಿಸಿದಂತೆ ತೋರಿತು.

ನಾನಿನ್ನೂ ಚಿರಗಿನಲ್ಲೇ ಇದ್ದೆ, ಆ ಸ್ಮಶಾನ ಮೌನವನ್ನ ಒಡೆದ ಜವಾನನ ದನಿ "ಇದೇನು ಹೊಸದಲ್ಲ ಬುಡಿ ಸಾರ್" ಅಂತು. ನನಗದು ಅರ್ಥವಾಗದೇ ನನ್ನದೇ ಗುಂಗಿನಲ್ಲಿದ್ದೆ. ಅಷ್ಟರಲ್ಲಿ ಆ ಹುಡುಗ ಹೊರಗೆ ಬಂದ; ತೋಳಿಗೆ ಅಂಟಿದ್ದ ಪ್ಲಾಸ್ಟರನ್ನ ಕಿತ್ತೆಸೆದು ಕತ್ತಲಲ್ಲಿ ಕಾಣೆಯಾದ.

ಮನುಷ್ಯತ್ವವನ್ನ ಹಂಗಿಸುತ್ತಿದ್ದ ಆ ರಕ್ತದ ಕಲೆಗಳನ್ನು ಒದ್ದೆ ಬಟ್ಟೆಯಿಂದ ಅಳಿಸುತ್ತಲಿದ್ದ ಜವಾನ ಮತ್ತೆ ನುಡಿದ– "ಇದು ನೂರನೇ ಸಲವಿರಬೇಕು ಸಾರ್" ನಾನು ಯಾಕೆ,ಏನು, ಎತ್ತ ಎಂದು ವಿಚಾರಿಸಿದೆ. ಆತ ಹೇಳಿದ್ದರ ಸಾರಾಂಶವಿಷ್ಟು:

ಆ ಹುಡುಗಂದು ಇದೇಕಸಬು.ಕಂಡೋರ್ನೆಲ್ಲ ಕಾಸು ಕೇಳ್ತಾನೆ. ಕೊಡದೆ ಹೋದ್ರೆ ತನಗೆ ತಾನೇ ಬ್ಲೇಡ್‌ನಲ್ಲಿ ಹೊಡ್ಕೊಂಡು ಸತ್ತೇ ಹೋಗ್ತೀನಂತ ನಾಟಕ ಮಾಡ್ತಾನೆ ಆಮೇಲೆ ಆಸ್ಪತ್ರೆಗೆ ಬರೋದು, ಪ್ಲಾಸ್ಟರ್ ಹಾಕ್ಸೋದು, ಕಿತ್ತಾಕೋದು ಎಲ್ಲ ಮಾಮೂಲು.

ಹಸಿವು ಯಾತನೆಗಳ ಆ ಮನುಷ್ಯ ಬದುಕಿನ ಕ್ರೂರ ಶೋಷಣೆಗಳ ಫಲವಾಗಿ ತನ್ನ ಮೇಲೆ ತಾನೇ ನಡೆಸಿಕೊಳ್ಳುವ ಹಲ್ಲೆಗಾಗಿ ಮರುಗಿದೆ. ಹಸಿವು ವ್ಯಕ್ತಗೊಳಿಸುವ ಪ್ರತಿಭಟನೆಯ ರೀತಿಗಾಗಿ ನಾನು ಕೊಂಚ ದಿಗಿಲಾಗಿದ್ದೆ.

–ಮುಳ್ಳೂರು ನಾಗರಾಜ್

## ಓದುಗರ ಪತ್ರಗಳು

### ಶಿಕ್ಷಣ ಕ್ಷೇತ್ರದ ಗೊಂದಲಕ್ಕೆ ಕೊನೆ ಎಂದು?

'ದೀವಟಿಗೆ' ಸಂಪಾದಕರಿಗೆ

ಸ್ವಾಮಿ,

ಪದವಿ ಪೂರ್ವ ಶಿಕ್ಷಣದ ೨ನೇ ವರ್ಗಕ್ಕೆ ಈ ವರ್ಷ ಕನ್ನಡ ಉಪಪಠ್ಯ ಪುಸ್ತಕವಾಗಿರುವ "ಸಂಬಂಧಗಳು" ಕೆಲವು ಬಗೆಯ ವಿವಾದಗಳಿಗೆ ಕಾರಣವಾಗಿತ್ತು. "ಈ ಪುಸ್ತಕದ ಕೆಲವು ಕಡೆಗಳಲ್ಲಿನ ಅನುಚಿತ ಪ್ರಸಂಗ–ಅವಾಚ್ಯ ಶಬ್ದಗಳನ್ನು ತೆಗೆದು ಹಾಕುವುದಾಗಿ" ೧೧-೭-೮೩ರ ಪತ್ರಿಕೆಗಳಲ್ಲಿ ಸಂಬಂಧಪಟ್ಟ ಶಿಕ್ಷಣ ಮಂಡಲಿ ಪ್ರಕಟಿಸಿರುವುದರಿಂದ ವಿದ್ಯಾರ್ಥಿ–ವಿದ್ಯಾರ್ಥಿನಿಯರ ಎದುರಿಗೆ ಪಾಠ ನಡೆಸುವ ನೇರ ಹೊಣೆಗಾರರಾದ ಅಧ್ಯಾಪಕರಿಗೆ ಉಂಟಾಗಿದ್ದ ಆಂತಕ ಇದೀಗ ದೂರವಾಗಿರಬಹುದು. ಇದು ಪೋಷಕರಿಗೂ ಸಮಾಧಾನ ತಂದಿದೆ.

ಕುತೂಹಲದಿಂದ ಪುಸ್ತಕವನ್ನು ಓದಿ ಮುಗಿಸಿದಾಗ ಅನ್ನಿಸಿದ ಮುಖ್ಯ ವಿಷಯವೆಂದರೆ: ನಮ್ಮ ಮಕ್ಕಳಿಗೆ ನೀಡಬೇಕಾಗಿರುವುದು ಶಿಕ್ಷಣವನ್ನೆ? ಅಥವಾ ಅಗ್ಗದ ಮನರಂಜನೆಯನ್ನೆ? ಈ ೨ನೆಯದಂತೂ ಈ ಸ್ವತಂತ್ರ ಭಾರತದಲ್ಲಿ ಕೀಳ ದರ್ಜೆಯ ಸಾಹಿತ್ಯ-ಚಲಚ್ಚಿತ್ರ-ಹಾಡು ಮುಂತಾದ ಮಾಧ್ಯಮಗಳ ಮೂಲಕ ಶಾಲೆಯ ಹೊರಗಡೆ ಸತತವಾಗಿ ಮಕ್ಕಳ ಮಿದುಳು ತೊಳೆಯುತ್ತಿರುವಾಗ (ಬ್ರೈನ್ ವಾಶಿಂಗ್) ಶಾಲೆಯ ಕಲಿಕೆಯಲ್ಲಿಯೂ ಅದನ್ನೇ ತುರುಕಬೇಕೆ?

ಸ್ವಾತಂತ್ರ್ಯ ಪಡೆದು ೩೫ ವರ್ಷ ಕಳೆದರೂ ರಾಷ್ಟ್ರದ ಪ್ರಗತಿಯ ಜೀವಾಳವೆನಿಸಿದ ಶಿಕ್ಷಣ ಕ್ಷೇತ್ರದಲ್ಲಿ ಸಲ್ಲದ ಗೊಂದಲವೆಬ್ಬಿಸುತ್ತ ಯುವಕ–ಯುವತಿಯರಲ್ಲಿ ಆತ್ಮ ವಿಶ್ವಾಸ–ಬದುಕಿನಲ್ಲಿ ಭರವಸೆ–ದೇಶ ಕಟ್ಟುವುದರಲ್ಲಿ ಉತ್ಸಾಹ ಮೂಡಿಸಲು ವಿಫಲಗೊಂಡು ನಮ್ಮ ಎಲ್ಲ ಕೃತಿಗಳಿಂದ ಅವರನ್ನು ದಿಕ್ಕುತಪ್ಪಿಸುತ್ತಿರುವುದಕ್ಕೆ ಕೊನೆ ಎಂದು?

–ಹರಿಹರಪುರ ಬಿ. ಸುಬ್ರಹ್ಮಣ್ಯ,
ಬೆಂಗಳೂರು.

### ಹಸುಗಳಿಗೆ ಹಲಸಿನ ಹಾರ

ಸ್ವಾಮಿ,

ಶೃಂಗೇರಿ ತಾಲೋಕ್ ಅಡ್ಡಗದ್ದೆ ಗ್ರಾಮದ ಅಣ್ಣಾಕುಡಿಗೆ ಕಾಫಿ ತೋಟದಲ್ಲಿ ಒಂದೊಂದು ಕಾಫಿ ಗಿಡಕ್ಕೆ ಒಂದೊಂದು ಹಲಸಿನ ಮರವಿದ್ದ ಹಾಗಿದೆ. ಒಂದೊಂದು ಹಲಸಿನ ಮರದಲ್ಲು ಎಲೆಗೆ ಒಂದರಂತೆ ಹಲಸಿನ ಕಾಯಿಗಳು. ಆ ಕಾಯಿಗಳು ಈಗ ಹಣ್ಣಾಗುತ್ತಿವೆ. ಹಣ್ಣಿನ ಆಸೆಗಾಗಿ ಹಸುಕರುಗಳು ಅಲ್ಲಿಗೆ ಹೋಗುತ್ತವೆ. ಅಲ್ಲಿ ಕೆಲಸ ಮಾಡುವವರು ಮಧ್ಯಾಹ್ನದ ವೇಳೆಯಲ್ಲಿ ಹಲಸಿನ ಹಣ್ಣನ್ನು ಕೊಯ್ದು ತಮಗೆ ಬೇಕಾದಷ್ಟು ಉಪಯೋಗಿಸಿಕೊಂಡು ಮಿಕ್ಕಿದ್ದನ್ನು ತಿಂದ ಹಲಸಿನ ಸೋರೆ ಒಂದು ಹಣ್ಣನ್ನು ಗಾಲಿ ಕೊರೆದು (ನಾಲ್ಕಾರು ಕಿಲೋ ಭಾರ) ಬಳ್ಳಿಗೆ ಸುರಿದು ಹಸುಕರುಗಳ ಕೋಡಿಗೆ ಸುರಿದು, ಕೊರಳಿಗೆ ಹಾರಹಾಕಿ ಕಳುಹಿಸುತ್ತಾರೆ ಹೀಗೆ ಈ ಹೊರೆಯನ್ನು ತಾಳಲಾರದೆ ಹಾಗೂ ಹೀಗೂ ಮನೆಯನ್ನು ಸೇರುತ್ತವೆ. ಮನೆಗೆ ಬರುವಾಗ ಕೊರಳಿಗೆ ಹಾಕಿರುವ ಹಾರ ಕತ್ತು ಬಿಗಿದಿರುತ್ತದೆ.

ಈ ಕೆಲಸವನ್ನು ಹೀಗೇ ಮಾಡಿದರೆ ಒಂದಲ್ಲ ಒಂದು ದಿನ ಅಪಾಯಕ್ಕೆ ಈಡಾಗಬಹುದು. ಆದ್ದರಿಂದ ದಯವಿಟ್ಟು ಇನ್ನು ಮೇಲಾದರೂ ಈ ಕೆಲಸವನ್ನು ಮಾಡಬಾರದಾಗಿ ಕೇಳಿಕೊಳ್ಳುತ್ತೇನೆ.

ಹಸುಗಳ 'ಪರವಾಗಿ'

–ನೀ. ಮಂ. ಗೂ. ದೀ. ಅಡ್ಡಗದ್ದೆ.

### ಉತ್ಸಾಹಿ ಯುವಕರ ಸಾಹಸಕ್ಕೆ ಜನ ಸಹಕಾರ ಕೊಡಲಿ

ಶೃಂಗೇರಿ ಪುರಸಭೆಯಿಂದ ಮನೆಯಿಲ್ಲದವರಿಗೆ ಮನೆ ಎಂದು ಮಾಡಿಕೊಟ್ಟ ವಿಷಯ ಎಲ್ಲರಿಗೂ ತಿಳಿದಿದೆ. ಕೆರೆ ಆಂಜನೇಯ ಸ್ವಾಮಿ ದೇವಸ್ಥಾನದ ಹಿಂಬದಿಯಲ್ಲಿರುವ ಗುಡ್ಡದಲ್ಲಿ ಮನೆ ಮಾಡಿಕೊಟ್ಟಿದ್ದಾರೆ. ಇದರಲ್ಲಿ ಕೆಲವು ಮನೆಗಳು ಮಾತ್ರ ನಿರ್ಮಾಣ ಮುಗಿಸ್ತಿ ಮಾಡಲಿಲ್ಲ. ಅದು ಅಧಿಕಾರಿಗಳ ತಪ್ಪೋ, ಕಂಟ್ರಾಕ್ಟರ ತಪ್ಪೋ ತಿಳಿದಿಲ್ಲ. ಈ ಮನೆಯ ಒಂದೆ ಗುಡ್ಡದ ಮಣ್ಣು ಮನೆಯ ಮೇಲೆ ಕುಸಿದು ಬೀಳುತ್ತಿದೆ. ಉತ್ಸಾಹಿ ಯುವಕರು ೨೦ ಮಂದಿ ಮಣ್ಣನ್ನು ಎತ್ತಿಹಾಕಿ ಮನೆ ಉಳಿಸಿದ್ದಾರೆ. ಇದು ೧೧-೭-೮೩ ರಿಂದ ಪ್ರಾರಂಭವಾಗಿದೆ. ಈ ಉತ್ಸಾಹಿ ಯುವಕರಿಗೆ ಊರ ಜನರು ಸಹಕಾರ ಕೊಡಲಿ.

–ಒಬ್ಬ ನಿವಾಸಿ, ಕೆರೆ ಆಂಜನೇಯ
ಸ್ವಾಮಿ ಬಡಾವಣೆ, ಶೃಂಗೇರಿ.

## ಶೃಂಗೇರಿಯ ಧನ್ವಂತರಿ ಆಸ್ಪತ್ರೆ

# ಚಿಕಿತ್ಸೆ ದುರ್ಲಭವಾದ ಹಳ್ಳಿಗರಿಗೆ ಹತ್ತಿರದಲ್ಲೇ ಎಲ್ಲ ಸೌಲಭ್ಯದ ಗುರಿ

ಶೃಂಗೇರಿಯ ಸುತ್ತಮುತ್ತಲಿನ ಹಳ್ಳಿಗಳ ಜನರಿಗೆ ವೈದ್ಯಕೀಯ ಸೌಲಭ್ಯ ಬಹಳ ಕಷ್ಟ ಸಾಧ್ಯವಾದ ವಿಷಯ. ಸಾಧಾರಣ ಮಟ್ಟದ ಔಷಧೋಪಚಾರ ಬಿಟ್ಟರೆ ವಿವರವಾದ ರೋಗ ಪರೀಕ್ಷೆಗಳಾಗಲೀ, ಶಸ್ತ್ರಚಿಕಿತ್ಸೆಗಳಾಗಲೀ, ದೀರ್ಘಕಾಲ ಆಸ್ಪತ್ರೆಯಲ್ಲಿ ಉಳಿದು ಚಿಕಿತ್ಸೆ ಪಡೆಯುವ ಸೌಕರ್ಯಗಳೇ ಇಲ್ಲದವರಿಗೆ ಅತಿ ಹತ್ತಿರದ ಆಸ್ಪತ್ರೆಗಳಿಂದ ರೆ ಮಣಿಪಾಲ ಅಥವಾ ಶಿವಮೊಗ್ಗದವು. ಇದು ತಕ್ಕಮಟ್ಟಿಗಾದರೂ ಅನುಕೂಲಸ್ಥರಾಗಿದ್ದವರಿಗೆ ಮಾತ್ರ ಸಾಧ್ಯವಾಗುತ್ತಿದ್ದ ಹವಣಿಕೆ. ಜನ ಸಾಮಾನ್ಯರು ಅಲ್ಲಿಗೆಲ್ಲ ಹೋಗಲೇ ಬೇಕಾದ ಪರಿಸ್ಥಿತಿ ಬಂದರೆ ಅವರಿಗಾಗುತ್ತಿದ್ದ ತಾಪತ್ರಯ ಹೇಳಲು ಅಸಾಧ್ಯ.

ಈ ಕೊರತೆಯನ್ನು ಪೂರ್ಣವಾಗಿ ತುಂಬಿ, ಸುತ್ತಮುತ್ತಲಿನ ಎಲ್ಲ ಜನರ ಎಲ್ಲಾ ರೀತಿಯ ವೈದ್ಯಕೀಯ ಅಗತ್ಯವನ್ನು ಪೂರೈಸುವ ದಿಕ್ಕಿನತ್ತ ಪ್ರಯತ್ನಿಸುತ್ತಿರುವ ಸಂಸ್ಥೆ ಇಲ್ಲಿನ ಶ್ರೀಧನ್ವಂತರಿ ಧರ್ಮಾರ್ಥ ಆಸ್ಪತ್ರೆ. ಶೃಂಗೇರಿಯ ಹಿರಿಯ ಗುರುಗಳ ಪೀಠಾರೋಹಣದ ಬೆಳ್ಳಿ ಹಬ್ಬದ ನೆನಪಿಗಾಗಿ ಸ್ಥಾಪಿಸಲಾದ ಇದು ಪೂರ್ತಿ ಧರ್ಮಾರ್ಥವೇ ಆಗಿ ಗಳಿಂದಲೇ ನಡೆಯುತ್ತಿರುವಂಥದ್ದು.

ಸದ್ಯಕ್ಕೆ ೧೦ ಹಾಸುಗೆಗಳುಳ್ಳ ಗಂಡಸರ ವಾರ್ಡು, ೯ ಹಾಸಿಗೆಯ ಹೆಂಗಸರ ವಾರ್ಡು ೪ ಹಾಸಿಗೆಗಳ ತೀವ್ರ ಮತ್ತು ಸತತ ನಿರೀಕ್ಷಣೆಯ ವಾರ್ಡು ಮತ್ತು ತುರ್ತು ಚಿಕಿತ್ಸೆಯ ವಾರ್ಡು–ಹೀಗೆ ನಾಲ್ಕು ವಾರ್ಡುಗಳುಳ್ಳ, ಒಳರೋಗಿಗಳ ವಿಭಾಗ, ಹೊರರೋಗಿಗಳ ವಿಭಾಗ, ಎಕ್ಸರೇ ಘಟಕ, ಶಸ್ತ್ರ ಚಿಕಿತ್ಸಾ ಘಟಕ, ರೋಗಪರೀಕ್ಷೆಯ ಪ್ರಯೋಗಶಾಲೆ, ಸ್ವಂತ ಔಷಧ ಸಂಗ್ರಹ, ಕ್ಯಾಂಟೀನು ಇವಿಷ್ಟನ್ನು ಹೊಂದಿದ್ದು ಬರುವ ವರ್ಷ ೫೦ ಹಾಸಿಗೆಗಳ ಇನ್ನೊಂದು ಕಟ್ಟಡ ಕಟ್ಟುವ ಸಿದ್ಧತೆ ನಡೆದಿದೆ.

ಎಲ್ಲ ವಿಭಾಗಗಳೂ ಪೂರ್ಣ ಸುಸಜ್ಜಿತವಾಗಿವೆ. ಯಾವುದೇ ಸಂದರ್ಭದಲ್ಲೂ ಯಾವ ವಿಷಯದಲ್ಲೂ ಕೊರತೆಯಾಗದಂತೆ ಸಜ್ಜುಗೊಳಿಸಬೇಕೆಂಬುದು ಗುರಿಯಾಗಿದ್ದು, ಈ ಪ್ರಯತ್ನ ಇನ್ನೂ ಮುಂದುವರಿಯುತ್ತಿದೆ. ಉಪಕರಣಗಳನ್ನು ಸತತವಾಗಿ ಸುಸ್ಥಿತಿಯಲ್ಲಿಡಲಾಗುತ್ತಿದೆ. ಒಳರೋಗಿಗಳಿಗೆ ಹೊರಗಿನಿಂದ ಆಹಾರ ಸರಬರಾಜು ನಿಷಿದ್ಧ. ಆಯಾ ರೋಗಿಗೆ ಕೊಡಬಹುದಾದ ಆಹಾರವನ್ನು ಆಸ್ಪತ್ರೆಯ ಕ್ಯಾಂಟೀನಿನಿಂದಲೇ **ಉಚಿತವಾಗಿ** ಒದಗಿಸಲಾಗುತ್ತದೆ.

ರೋಗಗಳ ಪರೀಕ್ಷೆ, ಚಿಕಿತ್ಸೆ, ಉಪಚಾರ, ಇವುಗಳಿ ಎಲ್ಲವೂ ಉಚಿತ. (ನಾಲ್ಕು ವಿಶೇಷ ಸೌಲಭ್ಯದ ವಾರ್ಡುಗಳಿಗೆ ಮಾತ್ರ ದಿನಕ್ಕೆ ೨೧ ರೂ. ಬಾಡಿಗೆ ವಿಧಿಸಲಾಗುತ್ತದೆ. ಚಿಕಿತ್ಸೆ ಉಚಿತ.)

ರೋಗಿಗಳಿಗೆ ಶಸ್ತ್ರಚಿಕಿತ್ಸೆ ಅಗತ್ಯವಿದ್ದರೆ ಅಂಥ ಪ್ರಕರಣಗಳನ್ನೆಲ್ಲ ಒಟ್ಟಿಗೆ ಸೇರಿಸಿ ಸುಮಾರು ೩ ತಿಂಗಳಿಗೊಮ್ಮೆ ಶಸ್ತ್ರಚಿಕಿತ್ಸಾ ಶಿಬಿರವನ್ನು ನಡೆಸಲಾಗುತ್ತದೆ. ಮಣಿಪಾಲಿನಿಂದ ೬-೮ ಜನ ಪರಿಣತ ವೈದ್ಯರ ತಂಡ ಬಂದು ಬಿಡಾರ ಮಾಡಿ ಎಲ್ಲ ಶಸ್ತ್ರಚಿಕಿತ್ಸೆಗಳನ್ನು ನೆರವೇರಿಸಿಕೊಡುತ್ತದೆ. ತುರ್ತು ಶಸ್ತ್ರಚಿಕಿತ್ಸೆಯ ಅಗತ್ಯವಿದ್ದರೆ ವೈದ್ಯರನ್ನು ತುರ್ತಾಗಿ ಕರೆಸಿಕೊಳ್ಳಲಾಗುತ್ತದೆ.

ಕಳೆದ ಮೇ ತಿಂಗಳಲ್ಲಿ ನಡೆದ ಇಂಥ ಶಿಬಿರದಲ್ಲಿ ನಾಲ್ಕು ದೊಡ್ಡ ಪ್ರಮಾಣದ ಶಸ್ತ್ರಚಿಕಿತ್ಸೆಗಳೂ ಸೇರಿದಂತೆ ಒಟ್ಟು ೩೮ ಶಸ್ತ್ರಚಿಕಿತ್ಸೆ ನಡೆಸಲಾಯಿತು.

ಆಸ್ಪತ್ರೆಯಲ್ಲೇ ನಾಲ್ಕು ಜನ ವೈದ್ಯರಿದ್ದಾರೆ. ಅವರಲ್ಲೊಬ್ಬರು ಸ್ತ್ರೀರೋಗ ತಜ್ಞ. ದಿನನಿತ್ಯದ ಪ್ರಕರಣಗಳನ್ನು ಮಾಮೂಲಿ ಕಾಯಿಲೆಗಳನ್ನು ಇವರು ನೋಡಿಕೊಳ್ಳುತ್ತಾರೆ. ಕಣ್ಣು; ಕಿವಿ-ಮೂಗು-ಗಂಟಲು; ಮೂಳೆ; ನರರೋಗ ಮುಂತಾದ ವಿವಿಧ ವಿಶೇಷ ಪರಿಣತಿಯ ವಿಭಾಗಗಳಿಗೆ ವಾರಕ್ಕೊಮ್ಮೆಯಂತೆ ಭೇಟಿಕೊಟ್ಟು ನೋಡಿಕೊಳ್ಳುವ ವೈದ್ಯರ ವ್ಯವಸ್ಥೆ ಮಾಡಲು ಪ್ರಯತ್ನ ನಡೆಯುತ್ತಿದೆ. ಈಗಾಗಲೇ ಈ ದಿಕ್ಕಿನಲ್ಲಿ ಜೊತೆಗೆ ಖ್ಯಾತ ಹಲ್ಲಿನ ವೈದ್ಯರಾದ ಡಾ॥ ಎಸ್. ಎಸ್. ಮನೋಹರ ರಾವ್ ಅವರು ಪ್ರತಿ ಮಂಗಳವಾರ ಮಧ್ಯಾಹ್ನ ಇಲ್ಲಿಗೆ ಭೇಟಿಕೊಟ್ಟು ಚಿಕಿತ್ಸೆ ಮಾಡುತ್ತಿದ್ದಾರೆ.

**ಅಪರೂಪದ ಉಪಕರಣ**

ಆಸ್ಪತ್ರೆಯನ್ನು ಸುಸಜ್ಜಿತಗೊಳಿಸುವ ದಿಕ್ಕಿನಲ್ಲಿ ಒಂದು ದೊಡ್ಡ ಹೆಜ್ಜೆ–ದೆಹಲಿಯಿಂದ ಬರಲಿರುವ 'ಸ್ಕ್ಯಾನರ್' ಎಂಬ ಉಪಕರಣ. ವ್ಯವಸ್ಥಿತವಾದ ಎಕ್ಸರೇ ಘಟಕವನ್ನು ಕೊಡುಗೆಯಾಗಿ ಕೊಟ್ಟಿರುವ ಅಮೇರಿಕದ [illegible] ಫೌಂಡೇಶನ್ ಎಂಬ ಸಂಸ್ಥೆಯೇ ಈ ಹೊಸ ಉಪಕರಣವನ್ನೂ ದಾನವಾಗಿ ನೀಡಿದ್ದು, ಆಗಸ್ಟ್ ತಿಂಗಳಲ್ಲಿ ಅದು ಬಂದು ಸೇರುವ ನಿರೀಕ್ಷೆಯಿದೆ. ದೇಹದ ಯಾವುದೇ ಭಾಗದ ಯಾವುದೇ ರೀತಿಯ ಕಾಯಿಲೆಯನ್ನು

(೬ನೇ ಪುಟಕ್ಕೆ)

## ಕೊಪ್ಪ ತಾ॥ನ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರ ಕೊರತೆ ಎಷ್ಟು?

ಕೊಪ್ಪ: ಈ ತಾಲೂಕಿನ ಸರ್ಕಾರಿ ಹಿರಿಯ ಮತ್ತು ಕಿರಿಯ ಪ್ರಾಥಮಿಕ ಶಾಲೆಗಳಿಗೆ ಒಟ್ಟು ೩೭೪ ಜನ ಶಿಕ್ಷಕರು ಬೇಕಾಗಿದ್ದು, ಈಗ ೬೩ ಹುದ್ದೆಗಳು ಖಾಲಿ ಬಿದ್ದಿವೆ. (ಬಾಲವಾಡಿಗಳೂ ಸೇರಿದಂತೆ ಸರ್ಕಾರಿ ಅನುದಾನ ಪಡೆದ ಶಾಲೆಗಳಲ್ಲಿ ೩೧ ಶಿಕ್ಷಕರಿದ್ದು ಕೊರತೆ ಇಲ್ಲ.)

ಕಳೆದ ವರ್ಷವೇ ೪೦ ಶಿಕ್ಷಕರ ಕೊರತೆ ಇತ್ತು. ಈ ವರ್ಷದ ವರ್ಗಾವರ್ಗಿಯೂ ಸೇರಿ ಒಟ್ಟು ಇಷ್ಟಾಗಿದೆ. ಇದರಲ್ಲಿ ಇನ್ನು ೨ ಜನ ಮಾತ್ರ ಬರುವವರಿದ್ದು, ೬೧ ಜನರ ಕೊರತೆ ಸದ್ಯಕ್ಕೆ ಹಾಗೇ ಉಳಿಯುತ್ತದೆ.

ಜಿಲ್ಲಾ ಮಟ್ಟದ ನೇಮಕಾತಿ ಸಮಿತಿ ರಚನೆಯಾಗಿ, ನೇಮಕಗಳು ಆಗಲು ಇನ್ನು ತಿಂಗಳುಗಳು ಹಿಡಿಯುತ್ತವೆ. ಅಲ್ಲಿಯವರೆಗೆ, ಹಾಲಿ ಸೀನಿಯಾರಿಟಿ ಲಿಸ್ಟ್ ಆಗಿದ್ದು, ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ನೊಂದಾಯಿಸಿರುವವರನ್ನು ಸದ್ಯಕ್ಕೆ ನೇಮಕ ಮಾಡುವ ಉದ್ದೇಶವಿದೆಯೆಂದು ಹೇಳಲಾಗಿದೆ.

ಏಕೋಪಾಧ್ಯಾಯ ಶಾಲೆಗಳು ಉಪಾಧ್ಯಾಯರಿಲ್ಲದೆ ಮುಚ್ಚದಂತೆ ಬೇರೆ ಶಾಲೆಗಳಿಂದ ತಾತ್ಕಾಲಿಕ ನೇಮಕಗಳ ವ್ಯವಸ್ಥೆ ಮಾಡಲಾಗಿದೆಯೆಂದು ಸಹಾಯಕ ವಿದ್ಯಾಧಿಕಾರಿ ಹೆಚ್. ಎಂ. ಮಲ್ಲಯ್ಯ ತಿಳಿಸಿದ್ದಾರೆ.

### ಅಂಚೆ ನೌಕರರ ಸಭೆ

ಹರಿಹರಪುರ: ಕೊಪ್ಪ ಅಂಚೆ ನೌಕರರ ಸಂಘದ ಮಾಸಿಕ ಜಂಟೀ ಕಾರ್ಯಕಾರಿ ಸಮಿತಿಯ ಸಭೆಯು ಜು. ೧೧ ರಂದು ಇಲ್ಲಿನ ಅಂಚಾಳದನದಲ್ಲಿ ಟಿ. ಗೋಪಾಲಕೃಷ್ಣರವರ (ಸಬ್ ಪೋಸ್ಟ್ ಮಾಸ್ಟರ್ ಹರಿಹರಪುರ) ಅಧ್ಯಕ್ಷತೆಯಲ್ಲಿ ನಡೆಯಿತು.

ಶಾಖಾ ಅಧ್ಯಕ್ಷ ಎಂ.ನಾಗಪ್ಪ ಹಾಗೂ ಕಾರ್ಯದರ್ಶಿ ಟೀಕಪ್ಪ ಸಭೆಯಲ್ಲಿ ಮಾತನಾಡಿ ಜು. ೪ ರಿಂದ ೬ ರವರೆಗೆ ರಾಯಚೂರಿನಲ್ಲಿ ನಡೆದ ಕರ್ನಾಟಕ ವಲಯ ಸಮ್ಮೇಳನದಲ್ಲಿ ಕೈಗೊಂಡ ತೀರ್ಮಾನದಂತೆ ಅತೀ ಮುಖ್ಯ ಬೇಡಿಕೆಗಳಾದ ಇಲಾಖಾ ನೌಕರರ ಎರಡು ಬೋನಸ್‌ಗಳ ಬಗ್ಗೆ ಹಾಗೂ ಇಲಾಖೇತರ ನೌಕರರನ್ನು ಖಾಯಂಗೊಳಿಸುವ ಬಗ್ಗೆ ನಿರ್ಣಯವನ್ನು ಸಭೆಯ ಮುಂದಿರಿಸಿದಾಗ ಸಭೆಯು ಅನುಮೋದನೆ ನೀಡಿತು. ಇದರ ಬಗ್ಗೆ ಸರಕಾರವನ್ನು ತೀವ್ರವಾಗಿ ಒತ್ತಾಯಿಸಲಾಯಿತು.

ನಾಲ್ಕನೇ ದರ್ಜೆ ನೌಕರರ ಕಾರ್ಯದರ್ಶಿ ಎಸ್. ಶಿವಪ್ಪ, ಉಪಾಧ್ಯಕ್ಷ ಬಿ. ಕೃಷ್ಣರಾವ್ ಸಭೆಯಲ್ಲಿ ಹಾಜರಿದ್ದರು. ಐ. ಎಸ್. ಎಮ್. ಜೋಯಿಸ್ ಸ್ವಾಗತಿಸಿ, ಎಂ. ಆರ್. ಐತಾಳ್ ವಂದನಾರ್ಪಣೆ ಮಾಡಿದರು.

### ನಿಧನ

ಕೊಪ್ಪ: ಇಲ್ಲಿನ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕರಲ್ಲೊಬ್ಬರಾಗಿದ್ದ ಸಿದ್ದಯ್ಯ ಈಚೆಗೆ ನಿಧನರಾದರು. ಹಿಂದುಳಿದ ವರ್ಗದವರಾದ ಇವರು ಈ ಹಿಂದೆ ಕೆಲಕುಳಿ ಗ್ರಾಮ ಪಂಚಾಯ್ತಿಯ ಸದಸ್ಯರೂ ಆಗಿದ್ದರು.

## ಪಕ್ಕಿನ ರಜೆ ಮಂಜೂರಾಗಿದ್ದರೂ ಸಂಬಳ ಕಡಿತ!

(ನಮ್ಮ ಪ್ರತಿನಿಧಿಯಿಂದ)

ಹರಿಹರಪುರ: ಇಲ್ಲಿನ ಕಿರಿಯ ಕಾಲೇಜಿನ ಜವಾನ ಎಸ್. ಜಿ. ಸಿದ್ದಪ್ಪ ಎಂಬವರಿಗೆ ಹಕ್ಕಿನ ರಜೆ ಇದ್ದರೂ ಸಹ ಮೇ ೧೨ ದಿನಗಳ ಸಂಬಳ ಕಡಿತ ಮಾಡಲಾಗಿದೆಯೆಂದು ತಿಳಿದುಬಂದಿದೆ.

ಅನಾರೋಗ್ಯದ ನಿಮಿತ್ತ ಆತ ರಜೆ ಅರ್ಜಿ ಬರೆದು ಅಂಚೆಗೆ ಹಾಕಿದ್ದು ತಲುಪದೆ, ಪುನಃ ಕೆಲಸಕ್ಕೆ ಹಾಜರಾದಾಗ ವೈದ್ಯರ ಪ್ರಮಾಣ ಪತ್ರದೊಡನೆ ಪುನಃ ಕೊಟ್ಟ ರಜೆ ಅರ್ಜಿಯನ್ನು ಪರಿಗಣಿಸದೆ, ಆಡಳಿತ ಮಂಡಳಿಯವರು ಸಂಬಳ ಕಡಿತ ಮಾಡಿದ್ದಾರೆನ್ನಲಾಗಿದೆ.

ನ್ಯಾಯಕ್ಕಾಗಿ ಸಿದ್ದಪ್ಪ ಜಿಲ್ಲಾ ವಿದ್ಯಾಧಿಕಾರಿಗಳ ಮೊರೆ ಹೊಕ್ಕಿದ್ದಾರೆಂದು ಹೇಳಲಾಗಿದೆ.

## ಸನ್ಮಾನ ಸಮಾರಂಭ

ಕೊಪ್ಪ: ಇಲ್ಲಿನ ಕಿರಿಯ ಕಾಲೇಜು ಮತ್ತು ಪ್ರೌಢಶಾಲೆಗಳಿಂದ ಡಾ॥ಎಸ್.ವಿ. ಮಲ್ಲಿಕಾರ್ಜುನ ಭಟ್ಟರನ್ನು ಜು. ೧೧ ರಂದು ಸನ್ಮಾನಿಸಲಾಯಿತು. ಪ್ರಿನ್ಸಿಪಾಲ್ ಕೆ. ಎಸ್. ನಾರಾಯಣಸ್ವಾಮಿ ಅಧ್ಯಕ್ಷತೆ ವಹಿಸಿದ್ದರು. ಶಿವನಂಜಯ್ಯ, ವಿಶ್ವೇಶ್ವರ್, ರಾಜಶೇಖರ್, ನಾರಾಯಣ ಶೇರೆಗಾರ್ ಮಾತನಾಡಿದರು. ಸನ್ಮಾನಿತರಿಗೆ ನೆನಪಿನ ಕಾಣಿಕೆಗಳನ್ನು ನೀಡಲಾಯಿತು. ಡಾ॥ ಎಸ್. ವಿ. ಎಂ. ತಮ್ಮ ಪಿ. ಹೆಚ್. ಡಿ. ಪ್ರೌಢ ಪ್ರಬಂಧವಾದ "ಕನ್ನಡದಲ್ಲಿ ನಳ ಚರಿತ್ರೆಗಳು" ಕುರಿತು ಮಾತನಾಡಿ, ಅದರ ರಚನೆಗೆ ನೆರವಾದ ಎಲ್ಲರಿಗೂ ಕೃತಜ್ಞತೆ ಸಲ್ಲಿಸಿದರು.

ಕು॥ ಅಂಬಿಕಾ ಪ್ರಾರ್ಥಿಸಿದರು. ಎಸ್. ಹೆಚ್. ನಾಗರಾಜ್ ಸ್ವಾಗತಿಸಿದರು. ಎ. ಎಂ. ನಾಗರಾಜ್ ವಂದಿಸಿದರು.

## ಮರ ಬಿದ್ದು ಮನೆ ಜಖಂ

ಬಿದರಗೋಡು: ಜುಲೈ ೮ ರಂದು ಇಲ್ಲಿಗೆ ಸಮೀಪದ ಜೋಳೂರು ಎಂಬಲ್ಲಿ ರಾಮ ಪೂಜಾರಿ ಎಂಬುವರ ಮನೆಯ ಮೇಲೆ ಮನೆಯ ಹಿಂಭಾಗದಲ್ಲಿ ಇದ್ದ ಧೂಪದ ಮರ ಬುಡ ಸಹಿತ ಮಗುಚಿ ಭಾರಿ ಹಾನಿಯುಂಟಾಗಿದೆ. ಗೋಡೆಗಳು, ರೀಪು ಪಕಾಸಿ, ಮನೆಯ ಮುಕ್ಕಾಲು ಭಾಗದ ಹಂಚುಗಳು ನಾಶವಾಗಿವೆ. ಈ ಬಡ ಕೂಲಿ ಕಾರ್ಮಿಕನ ತೊಂದರೆ ಹೇಳದಷ್ಟಾಗಿದೆ. ಮಳೆಯೂ ಇಲ್ಲ, ಗಾಳಿಯೂ ಇಲ್ಲದ ವೇಳೆಗೆ ೮ ಗಂಟೆಯ ಸಮಯದಲ್ಲಿ ಮರವು ಮನೆಯ ಮೇಲೆ ಬಿದ್ದು ರಾಮಪೂಜಾರಿಯನ್ನು ಅನಾಥನನ್ನಾಗಿ ಮಾಡಿದೆ. ಇವರಿಗೆ ವಾಸಿಸಲು ಬೇರೆ ಸ್ಥಳವೂ ಇಲ್ಲ.

(ವರದಿ: ಎಸ್ಕೆ. ಶೃಂಗೇಶ್ವರ)

## ಬೀಳ್ಕೊಡುಗೆ ಸಮಾರಂಭ

ಕೊಪ್ಪ: ಕಳೆದ ನಾಲ್ಕು ವರ್ಷಗಳಿಂದ ಈ ತಾಲೂಕಿನಲ್ಲಿ ಜನಪ್ರಿಯ ಸಹಶಿಕ್ಷಣಾಧಿಕಾರಿಯಾಗಿದ್ದ ಎಂ. ಚಂದ್ರಶೇಖರಯ್ಯನವರಿಗೆ ತಾಲೂಕಿನ ಎಲ್ಲಾ ಶಿಕ್ಷಣ ಕೇಂದ್ರಗಳವರು ಈ ತಿಂಗಳ ಮೊದಲ ವಾರದಲ್ಲಿ ಆತ್ಮೀಯವಾಗಿ ಬೀಳ್ಕೊಟ್ಟರು. ಹರಿಹರಪುರದಲ್ಲಿ ಇದೇ ೫ ರಂದು ನಡೆದ ಸರಳ ಸಮಾರಂಭದಲ್ಲಿ ನೂತನ ಸಹ ಶಿಕ್ಷಣಾಧಿಕಾರಿ ಮಲ್ಲಯ್ಯನವರು ಅಧ್ಯಕ್ಷತೆ ವಹಿಸಿದ್ದು ಶಾಲಾ ತನಿಖಾಧಿಕಾರಿಗಳು ಉಪಸ್ಥಿತರಿದ್ದರು.

ದೊಡ್ಡೇಗೌಂಡರ್ ಸ್ವಾಗತಿಸಿ ಗೋವಿಂದ ರಾಯರು ವಂದಿಸಿದರು. ಚಂದ್ರಶೇಖರಯ್ಯನವರ ಬಗೆಗೆ ಸುಬ್ಬರಾವ್, ನಂಜುಂಡಶಾಸ್ತ್ರಿ, ಬಿ. ಎಸ್. ಶಿವಸ್ವಾಮಿ ಮಾತನಾಡಿದರು. ಶಿಕ್ಷಕ ಕೇಂದ್ರದ ಪರವಾಗಿ ನೆನಪು ಕಾಣಿಕೆ ನೀಡಲಾಯಿತು.

ಕಮ್ಮರಡಿ, ಕೊಪ್ಪ, ಜಯಪುರ, ಬಸರಿಕಟ್ಟೆಗಳಲ್ಲೂ ಇಂತಹ ಸಭೆ ನಡೆದ ವರದಿಗಳು ಬಂದಿವೆ.

## ನಾಲ್ಕನೇ ದರ್ಜೆ ನೌಕರರ ಸಮ್ಮೇಳನ

(ವರದಿ: ಹುಲಿಕೆರೆ ಮಂಜುನಾಥ್)

ನರಸಿಂಹರಾಜಪುರ: ರಾಜ್ಯ ಸರ್ಕಾರದ ೪ನೇ ದರ್ಜೆ ನೌಕರರ ಸಂಘದ ನ.ರಾ. ಪುರ ತಾಲೂಕು ಘಟಕದ ಆಶ್ರಯದಲ್ಲಿ ಜುಲೈ ೧೧ರಂದು ತಾಲೂಕು ಮಟ್ಟದ ನಾಲ್ಕನೇ ದರ್ಜೆ ನೌಕರರ ಸಮ್ಮೇಳನ ನಡೆಯಿತು. ರಾಜ್ಯ ಸಂಘದ ಪ್ರಧಾನ ಕಾರ್ಯದರ್ಶಿ ಎಂ. ಸಿದ್ದಪ್ಪ ಅಧ್ಯಕ್ಷತೆ ವಹಿಸಿದ್ದರು.

ರಾಜ್ಯದ ನಾಲ್ಕನೇ ದರ್ಜೆ ನೌಕರರ ಬಹುದಿನದ ಬವಣೆಗಳ ಬಗ್ಗೆ ಸಮ್ಮೇಳನದಲ್ಲಿ ವಿಚಾರ ವಿನಿಮಯ ನಡೆಯಿತು.

### ನಿರಶನದ ಮುನ್ಸೂಚನೆ

ತಾಲೂಕು ಘಟಕ ಸಲ್ಲಿಸಿದ ತನ್ನ ಸಮಸ್ಯೆಗಳನ್ನು ಕುರಿತ ಮನವಿಗೆ ಉತ್ತರ ನೀಡಿದ ಎಂ. ಸಿದ್ದಪ್ಪ, ಕಳೆದ ವರ್ಷ ನೌಕರರ ಸಮಸ್ಯೆಗಳ ಪರಿಹಾರಕ್ಕಾಗಿ ಎರಡು ಸಲ ಮುಷ್ಕರ ಕೈಗೊಂಡುದನ್ನು ಸ್ಮರಿಸಿ ತಮ್ಮ ಸಮಸ್ಯೆಗಳಿಗೆ ಪರಿಹಾರ ನೀಡುವ ಭರವಸೆ ನೀಡಿ ಮರೆತ ವಚನ ಭ್ರಷ್ಟ ಮುಖ್ಯಮಂತ್ರಿಗಳ ಸಮಯಸಾಧಕತನದ ಪ್ರವೃತ್ತಿಯನ್ನು ವಿರೋಧಿಸಿ ಜುಲೈ ೨೬ಕ್ಕೆ ಮುನ್ನ ನಮ್ಮ ಬೇಡಿಕೆಗಳನ್ನು ಈಡೇರಿಸದಿದ್ದಲ್ಲಿ ಆಮರಣಾಂತ ಉಪವಾಸ ಮುಷ್ಕರ ಹೂಡುವ ನಿಯೋಜಿತ ಕಾರ್ಯಕ್ರಮವೊಂದನ್ನು ರೂಪಿಸಲಾಗಿದ್ದು ಕೇಂದ್ರ ಸಂಘದ ಅಧ್ಯಕ್ಷರು ನಿರಶನವನ್ನು ಪ್ರಾರಂಭಿಸಲಿದ್ದು ರಾಜ್ಯಾದ್ಯಂತ ನಿರಶನಕ್ಕೆ ಎಲ್ಲ ನೌಕರರೂ ಸಿದ್ಧರಿರಬೇಕೆಂದು ತಿಳಿಸಿದರು.

ನಾಲ್ಕನೆಯ ದರ್ಜೆ ನೌಕರರನ್ನು ಮಾನವೀಯತೆಯಿಂದ ಅಧಿಕಾರಿಗಳು ಕಾಣುವಂತಾಗದಿದ್ದರೆ ನಿರಶನವಲ್ಲದೆ ಅನ್ಯಮಾರ್ಗವಿಲ್ಲವೆಂದು ವಿಷಾದಿಸಿದ ಸಿದ್ದಪ್ಪ, ನಾಲ್ಕನೇ ದರ್ಜೆ ನೌಕರರಿಗೆ ಸಿಗಬೇಕಾದ ಎಲ್ಲಾ ಸೌಲಭ್ಯಗಳ ಪಟ್ಟಿಯನ್ನು ಮತ್ತೊಮ್ಮೆ ಮುಖ್ಯಮಂತ್ರಿಗಳಿಗೆ ನೀಡಲಾಗುವುದೆಂದು ಭರವಸೆ ನೀಡಿದರು.

ಜಿಲ್ಲಾಧ್ಯಕ್ಷ ಡಿ. ಗೋವಿಂದಪ್ಪ ಮಾತನಾಡಿ, ಅನೇಕ ನೌಕರರನ್ನು ಅನವಶ್ಯಕವಾಗಿ ವರ್ಗಾವರ್ಗಿ ಮಾಡಿ ತೊಂದರೆಕೊಡಲಾಗುತ್ತಿದೆಯೆಂಬ ದೂರನ್ನು ಪರಿಶೀಲಿಸಿ ಸರ್ಕಾರದೊಂದಿಗೆ ಚರ್ಚಿಸುವುದಾಗಿ ಭರವಸೆ ಕೊಟ್ಟರು. ನೌಕರರ ಕುಂದುಕೊರತೆಗಳಲ್ಲಿ ಮುಖ್ಯವಾದ ನಿವೇಶನ-ಸಾಲ ಪಡೆಯುವಿಕೆಯಲ್ಲಿ ವಿಳಂಬ ನೀತಿ ಮುಂತಾದವುಗಳ ಬಗ್ಗೆ ಸರ್ಕಾರಕ್ಕೆ ಒತ್ತಾಯ ತರುತ್ತಿರುವುದಾಗಿ ತಿಳಿಸಿದರು.

ತಾಲೂಕಿನಾದ್ಯಂತ ಬಂದಿದ್ದ ಪ್ರತಿನಿಧಿಗಳು ತಮ್ಮ ಬೇಡಿಕೆ, ಕುಂದು-ಕೊರತೆಗಳ ಬಗ್ಗೆ ಸೌಹಾರ್ದದಿಂದ ಚರ್ಚಿಸಿದರು.

ಕು॥ ಗೀತಾ ಪ್ರಾರ್ಥಿಸಿದರು. ಕೆ. ಪಿ. ಪರಮೇಶ್ ಸ್ವಾಗತಿಸಿದರು. ತಾ॥ಘಟಕದ ಕಾರ್ಯದರ್ಶಿ ಸೀತಾರಾಮ ನಾಯಕ್ ವಂದಿಸಿದರು.

## ಧರ್ಮಾರ್ಥ ಆಸ್ಪತ್ರೆ

(೩ನೇ ಪುಟದಿಂದ)

ರೋಗಿಗೆ ಗೊತ್ತಾಗುವ ಮೊದಲೇ ಪತ್ತೆ ಹಚ್ಚಬಲ್ಲ ಸುಮಾರು ೩೨ ಲಕ್ಷ ರೂ. ಬೆಲೆಯ ಈ ಉಪಕರಣ ಭಾರತದಲ್ಲಿ ಇದು ಐದನೆಯದು. ಕರ್ನಾಟಕಕ್ಕೆ ಇದೇ ಮೊದಲು.

ಹೀಗೆ, ಹಸ್ಸಿಗಾಡಿನ–ಅದರಲ್ಲೂ ಮಲೆನಾಡಿನ–ಈ ಮೂಲೆಯೊಂದರಲ್ಲಿ ಇಷ್ಟು ಸುಸಜ್ಜಿತವಾದ ಉಚಿತ ಸೌಲಭ್ಯಗಳುಳ್ಳ ಇಂಥದೊಂದು ಆಸ್ಪತ್ರೆ ಬೆಳೆಯುತ್ತಿರುವುದು ಈ ಭಾಗದ ಜನರಿಗೆ ಬಹಳ ಅನುಕೂಲಕರ. ಅದರ ಸದುಪಯೋಗ ಪಡೆದುಕೊಳ್ಳುವುದನ್ನು ಜನ ಅಭ್ಯಾಸ ಮಾಡಬೇಕಾಗಿದೆ, ಅಷ್ಟೇ.



ಸಂಪಾದಕ, ಪ್ರಕಾಶಕ, ಮುದ್ರಕ: ಸಿರಿಮನೆ ನಾಗರಾಜ್. ನೇಸರ ಮುದ್ರಣ, ಕೊಪ್ಪ